**ಕರ್ನಾಟಕ ವಿಧಾನ ಪರಿಷತ್**

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 636 |
| ಸದಸ್ಯರ ಹೆಸರು | ಶ್ರೀ ಎಂ.ನಾರಾಯಣಸ್ವಾಮಿ |
| ಉತ್ತರಿಸುವ ದಿನಾಂಕ | 05/03/2021 |
| ಉತ್ತರಿಸುವವರು | ಮಾನ್ಯ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು |

| | **ಪ್ರಶ್ನೆಗಳು** | **ಉತ್ತರ** |
|---|---|---|
| ಅ | ಅಕ್ರಮಗಳನ್ನು ತಡೆಗಟ್ಟುವ ಸಲುವಾಗಿ ಹಣ ವರ್ಗಾವಣೆಯನ್ನು ಆನ್‌ಲೈನ್ ಮೂಲಕ ಮಾಡುವ ಕಾನೂನು ಜಾರಿಯಾಗಿದ್ದು, ಕಳೆದ ತಿಂಗಳಿಂದ ರೈತರ ಖಾತೆಗೆ ಹಣ ಬಂದಿಲ್ಲವೆಂದು ರಾಮನಗರ ರೇಷ್ಮೆ ಇಲಾಖೆಗೆ ರೈತರು ಮುತ್ತಿಗೆ ಹಾಕಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ | ಬಂದಿದ್ದಲ್ಲಿ, ಈ ಪ್ರಕರಣದ ಕುರಿತು ಮಾಹಿತಿ ಪಡೆದು ಕೊಳ್ಳಲಾಗಿದೆಯೇ; ಪಡೆದುಕೊಂಡಿದ್ದಲ್ಲಿ, ಆ ಬಗೆಗಿನ ಮಾಹಿತಿ ನೀಡುವುದು; | ರಾಮನಗರ ಸರ್ಕಾರಿ ರೇಷ್ಮೆ ಗೂಡು ಮಾರುಕಟ್ಟೆಯಲ್ಲಿ ದಿನಾಂಕ;08/01/2019 ರಿಂದ ಆನ್‌ಲೈನ್ ಪದ್ಧತಿ ಜಾರಿಯಲ್ಲಿದ್ದು, ರೀಲರುಗಳು ಮಾರುಕಟ್ಟೆ ಅಧಿಕಾರಿಗಳ ಖಾತೆಗೆ ಹಣ ವರ್ಗಾವಣೆ ಮಾಡುತ್ತಿದ್ದು, ಈ ಹಣವನ್ನು ರೈತರ ಖಾತೆಗೆ ವರ್ಗಾವಣೆ ಮಾಡಲಾಗುತ್ತಿದೆ. ಆದರೆ ಇತ್ತೀಚಿನ ದಿನಗಳಲ್ಲಿ ಕೆಲ ಬ್ಯಾಂಕುಗಳ ವಿಲೀನದಿಂದಾಗಿ ಹಾಗೂ ತಾಂತ್ರಿಕ ದೋಷದಿಂದ ಹಣ ವರ್ಗಾವಣೆ ಮಾಡಲು ವಿಳಂಬವಾಗಿರುತ್ತದೆ. ಇದರ ಹೊರತಾಗಿ ಆನ್‌ಲೈನ್ ಪಾವತಿಯಲ್ಲಿ ಯಾವುದೇ ತೊಂದರೆ ಇಲ್ಲದೆ ನಿರ್ವಹಿಸಲಾಗುತ್ತಿದೆ. |
| ಇ | ಒಂದು ವೇಳೆ ಇದಕ್ಕೆ ಅಧಿಕಾರಿಗಳು ಕಾರಣ ಆಗಿದ್ದಲ್ಲಿ, ಅಂತಹ ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಳ್ಳಲಾಗಿದೆಯೇ: | ಆನ್‌ಲೈನ್‌ಗೆ ಅಳವಡಿಕೆ ಪ್ರಕ್ರಿಯೆಯಲ್ಲಿನ ತಾಂತ್ರಿಕ ದೋಷಗಳು ಹಾಗೂ ಬ್ಯಾಂಕುಗಳ ವಿಲೀನ ಪ್ರಕ್ರಿಯೆಗಳಿಂದ ಸಮಸ್ಯೆ ಉದ್ಭವಿಸಿರುತ್ತದೆ. |
| ಈ) | ಬಗೆಹರಿಯದಿದ್ದಲ್ಲಿ ಯಾವಾಗ ಬಗೆಹರಿಯುತ್ತದೆ ಹಾಗೂ ಪರಿಹಾರ ನೀಡಲು ವಿಳಂಬ ವಾಗಿರುವುದಕ್ಕೆ ಕಾರಣ ಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಸರ್ಕಾರದ ಆದೇಶದಂತೆ ಹೆಚ್.ಡಿ.ಎಫ್.ಸಿ. ಬ್ಯಾಂಕ್ ಸಹಯೋಗದೊಂದಿಗೆ ಆನ್ ಲೈನ್ ಮೂಲಕ ಹಣವನ್ನು ರೇಷ್ಮೆ ಬೆಳೆಗಾರರ ಖಾತೆಗೆ ನೇರವಾಗಿ ವರ್ಗಾವಣೆ ಮಾಡಲಾಗುತ್ತಿತ್ತು. ಆದರೆ ಇತ್ತೀಚಿನ ದಿನಗಳಲ್ಲಿ ಕೆಲ ಬ್ಯಾಂಕುಗಳ ವಿಲೀನದಿಂದಾಗಿ ಖಾತೆಯ ಸಂಖ್ಯೆ ಮತ್ತು ಐ..ಎಫ್.ಎಸ್.ಸಿ., ಕೋಡ್, ಬದಲಾವಣೆಯಾಗಿದೆ. ಇದರಿಂದಾಗಿ ರೈತರಿಗೆ ಮಾಹಿತಿ ನೀಡಿ ಬದಲಾದ ಸಂಖ್ಯೆ ಪಡೆದು ಹಣ ವರ್ಗಾವಣೆ ಮಾಡಲು ವಿಳಂಬವಾಗಿರುತ್ತದೆ. ಇದರ ಹೊರತಾಗಿ ಆನ್‌ಲೈನ್ ಪಾವತಿಯಲ್ಲಿ ಯಾವುದೇ ತೊಂದರೆ ಇಲ್ಲದೆ ನಿರ್ವಹಿಸಲಾಗುತ್ತಿದೆ. ತಾಂತ್ರಿಕ ದೋಷಗಳನ್ನು ಶೀಘ್ರವೇ ಪರಿಹರಿಸಿ ಆನ್‌ಲೈನ್ ಪಾವತಿಯಲ್ಲಿ ಯಾವುದೇ ತೊಂದರೆ ಇಲ್ಲದೆ ಸುಗಮವಾಗಿ ಕಾರ್ಯ ನಿರ್ವಹಿಸಲಾಗುವುದು. |

**ಸಂಖ್ಯೆ: ರೇಷ್ಮೆ 48 ರೇಕೃವಿ 2021**

**(ಆರ್.ಶಂಕರ್)**
**ತೋಟಗಾರಿಕೆ ಮತ್ತು ರೇಷ್ಮೆ ಸಚಿವರು**